# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 478
ಸದಸ್ಯರ ಹೆಸರು : ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 16.12.2021
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ.ಸಂ | ಪ್ರಶ್ನೆ | ಇಲಾಖಾ ಉತ್ತರ |
|---|---|---|
| 1 | ಕರ್ನಾಟಕ ನೀರಾವರಿ ನಿಗಮದಿಂದ ನಿರ್ವಹಿಸಲ್ಪಡುತ್ತಿರುವ ವಾರಾಹಿ ನೀರಾವರಿ ಯೋಜನೆಯಡಿ ನಡೆಸಲಾದ ಕಳಪೆ ಕಾಮಗಾರಿ ಮತ್ತು ಅವ್ಯವಹಾರದ ಬಗ್ಗೆ ಲೋಕಾಯುಕ್ತ ವರದಿಯನ್ನು ಸರ್ಕಾರಕ್ಕೆ ಯಾವಾಗ ಸಲ್ಲಿಸಲಾಯಿತು. | ಮಾನ್ಯ ಉಪಲೋಕಾಯುಕ್ತ-1, ಕರ್ನಾಟಕ ಲೋಕಾಯುಕ್ತ ಇವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(1)ರಡಿ ಸಲ್ಲಿಸಿದ್ದ ದಿನಾಂಕ: 28.02.2018ರ ವರದಿಯು ದಿನಾಂಕ: 23.03.2018 ರಂದು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. |
| 2 | ಸರ್ಕಾರಕ್ಕೆ ಸಲ್ಲಿಸಲ್ಪಟ್ಟ ಲೋಕಾಯುಕ್ತ ವರದಿಯ ಮೇಲೆ ಸರ್ಕಾರದ- ಕ್ರಮವೇನು; ಒಂದು ವೇಳೆ ಸರ್ಕಾರವು ವರದಿಯ ಮೇಲೆ ಕ್ರಮವಹಿಸದೇ ಇರುವುದಾದರೆ ಲೋಕಾಯುಕ್ತ ತನಿಖೆಯ ಮತ್ತು ವರದಿ ಪಡೆಯುವ ಔಚಿತ್ಯವೇನು? | ಮಾನ್ಯ ಉಪಲೋಕಾಯುಕ್ತ-1, ಕರ್ನಾಟಕ ಲೋಕಾಯುಕ್ತ ಇವರ ದಿ: 28.02.2018ರ ವರದಿಯನ್ನು ಪರಿಶೀಲಿಸಿ, ವಾಸ್ತವಾಂಶವನ್ನೊಳಗೊಂಡ ವರದಿಯನ್ನು ಸರ್ಕಾರಕ್ಕೆ ನೀಡುವಂತೆ ದಿನಾಂಕ:04.08.2018 ರಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಇವರನ್ನು ಕೋರಲಾಗಿತ್ತು.<br><br>ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರು ದಿನಾಂಕ: 23.10.2018 ರಂದು ವರದಿ ಸಲ್ಲಿಸಿ ವಾರಾಹಿ ನೀರಾವರಿ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ ಹಾಗೂ ಕರ್ನಾಟಕ ನೀರಾವರಿ ನಿಗಮದ ಮಾರ್ಗಸೂಚಿಗಳಂತೆ ಅನುಷ್ಠಾನಗೊಳಿಸಲಾಗಿರುತ್ತದೆ. ಅಲ್ಲದೇ, ಕಾಮಗಾರಿಗಳ ನಿರ್ಮಾಣದಲ್ಲಿ ಸ್ಥಳಕ್ಕನುಗುಣವಾಗಿ ವಿವಿಧ ತಾಂತ್ರಿಕ ಕಾರಣಗಳಿಂದ ನಿರ್ಮಿಸಬೇಕಾದ ಬದಲಿ ಐಟಂಗಳು ಮತ್ತು ಹೆಚ್ಚುವರಿ ಐಟಂಗಳನ್ನೊಳಗೊಂಡ ಪ್ರಸ್ತಾವನೆಗಳಿಗೆ ನಿಗಮದ ತಾಂತ್ರಿಕ ಉಪ ಸಮಿತಿ ಹಾಗೂ ನಿಗಮದ ಮಂಡಳಿಯ ಸಕ್ಷಮ ಅನುಮೋದನೆ ಪಡೆಯಲಾಗಿರುತ್ತದೆ.<br>ಸದರಿ ವಸ್ತುನಿಷ್ಟ ವರದಿಯನ್ನು ಕರ್ನಾಟಕ ನೀರಾವರಿ ನಿಗಮದ ತಾಂತ್ರಿಕ ಉಪಸಮಿತಿ ಹಾಗೂ ನಿಗಮ ಮಂಡಳಿ ಸಭೆಯಲ್ಲಿ ಮಂಡಿಸಿ ಸಮಿತಿ ಮತ್ತು ಮಂಡಳಿಯ ಅಭಿಪ್ರಾಯ / ಶಿಫಾರಸ್ಸು ಪಡೆದು ನಿಯಮಾನುಸಾರ ಮುಂದಿನ ಕ್ರಮ ವಹಿಸಲಾಗುವುದು ಎಂದು ವರದಿ ನೀಡಿದ್ದರು.<br><br>ವ್ಯವಸ್ಥಾಪಕ ನಿರ್ದೇಶಕರು, ಕನೀನಿನಿ., ಇವರ ದಿನಾಂಕ: 23.10.2018ರ ವರದಿಯನ್ನು ನಿಯಮಾನುಸಾರ ಪರಿಶೀಲಿಸಿ ಲೋಕಾಯುಕ್ತ ತನಿಖಾ ವರದಿಯನ್ನು ನಿಗಮದ ತಾಂತ್ರಿಕ ಉಪ ಸಮಿತಿ ಹಾಗೂ ನಿಗಮದ ನಿರ್ದೇಶಕರುಗಳ ಮಂಡಳಿಯ ಸಭೆಯಲ್ಲಿ ಮಂಡಿಸಿ ಸಮಿತಿ ಮತ್ತು ನಿರ್ದೇಶಕರುಗಳ ಮಂಡಳಿಯ ಅಭಿಪ್ರಾಯ / ಶಿಫಾರಸ್ಸು ಪಡೆದು ಸ್ಪಷ್ಟ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಮರು ಸಲ್ಲಿಸುವಂತೆ ವ್ಯವಸ್ಥಾಪಕ ನಿರ್ದೇಶಕರಿಗೆ ದಿನಾಂಕ: 08.09.2021 ರ ಪತ್ರದಲ್ಲಿ ಹಾಗೂ ನೆನಪೋಲೆ-2ರ ಪತ್ರ ದಿನಾಂಕ: 21.04.2021 ರಲ್ಲಿ ಸೂಚಿಸಲಾಗಿತ್ತು.<br><br>ದಿನಾಂಕ: 02.02.2021 ರಂದು ಜರುಗಿದ ನಿಗಮದ 174ನೇ ತಾಂತ್ರಿಕ ಉಪಸಮಿತಿ ಸಭೆಯಲ್ಲಿ ಸದರಿ ವಿಷಯದವನ್ನು ಮಂಡಿಸಿ, ಮಾನ್ಯ ಉಪ-ಲೋಕಾಯುಕ್ತರವರ ವರದಿಯಲ್ಲಿನ ಅಂಶಗಳಿಗೆ ಕಂಡಿಕೆವಾರು ಅನುಪಾಲನಾ ವರದಿಯನ್ನು ಮುಂಬರುವ ತಾಂತ್ರಿಕ ಉಪಸಮಿತಿ ಸಭೆಯಲ್ಲಿ ಮಂಡಿಸಿ, ತದನಂತರ ನಿಗಮದ ನಿರ್ದೇಶಕರುಗಳ ಮಂಡಳಿ ಸಭೆಯಲ್ಲಿ ಮಂಡಿಸಿ, ಮಂಡಳಿಯ ಅಭಿಪ್ರಾಯ / ಶಿಫಾರಸ್ಸು ಪಡೆದು ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ವರದಿ ಸಲ್ಲಿಸಲು ಕ್ರಮ ಜರುಗಿಸಲಾಗುವುದು ಎಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರು ದಿನಾಂಕ: 09.12.2021ರ ಪತ್ರದಲ್ಲಿ ತಿಳಿಸಿರುತ್ತಾರೆ.<br><br>ಕರ್ನಾಟಕ ನೀರಾವರಿ ನಿಗಮದ ನಿರ್ದೇಶಕರುಗಳ ಮಂಡಳಿಯ ನಿರ್ಣಯವನ್ನು ನಿರೀಕ್ಷಿಸಲಾಗಿದೆ. |

ಜಸಂಇ 82 ಸೇಇವಿ 2021

(ಗೋವಿಂದ ಎಂ ಕಾರಜೋಳ)
ಜಲಸಂಪನ್ಮೂಲ ಸಚಿವರು